| ಕರ್ನಾಟಕ ವಿಧಾನ ಪರಿಷತ್ತು | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ: | 177 (1286+1083) |
| ಸದಸ್ಯರ ಹೆಸರು: | ಶ್ರೀ ಎನ್. ಅಪ್ಪಾಜಿಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) ಹಾಗೂ ಶ್ರೀ ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರದಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ: | 22.03.2021 |
| ಉತ್ತರಿಸುವವರು: | ಮಾನ್ಯ ಅರಣ್ಯ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಉಪವಲಯ ಅರಣ್ಯಾಧಿಕಾರಿಗಳ ರಾಜ್ಯ ಮಟ್ಟದ ಸಂಯೋಜಿತ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಿಂದ ಪಡೆದಿರುವ ಅಭಿಪ್ರಾಯದಂತೆ ಸಂಯೋಜಿತ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿ ಅಂತಿಮಗೊಳಿಸಲಾಗಿದೆಯೇ? ಇಲ್ಲದಿದ್ದಲ್ಲಿ ಕಾರಣಗಳೇನು; ಯಾವ ಕಾಲಮಿತಿಯೊಳಗೆ ಪರಿಷ್ಕೃತ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗುವುದು; (ಮಾಹಿತಿ ನೀಡುವುದು) | ಉಪ ವಲಯ ಅರಣ್ಯಾಧಿಕಾರಿಗಳ ರಾಜ್ಯ ಮಟ್ಟದ ಸಂಯೋಜಿತ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಿಂದ ಪಡೆದಿದ್ದ ಅಭಿಪ್ರಾಯ ಕರ್ನಾಟಕ ಸಿವಿಲ್ ಸೇವಾ (ಜೇಷ್ಠತಾ) ನಿಯಮಗಳು, 1957ರ ನಿಯಮಗಳನ್ವಯ ಸ್ಪಷ್ಟತೆ ಇಲ್ಲದೇ ಇರುವುದರಿಂದ ಸದರಿ ಅಭಿಪ್ರಾಯವನ್ನು ಪುನರ್ ಪರಿಶೀಲಿಸಿ ಸ್ಪಷ್ಟ/ ನಿಖರ ಅಭಿಪ್ರಾಯ ನೀಡುವಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯನ್ನು ಕೋರಲಾಗಿದ್ದು ಸದರಿ ಅಭಿಪ್ರಾಯ ಪಡೆದ ನಂತರ ನಿಯಮಾನುಸಾರ ಪರಿಶೀಲಿಸಿ ಕ್ರಮವಹಿಸಲಾಗುವುದು. |
| ಆ) | 1996ನೇ ಸಾಲಿನಿಂದ 2019 ರವರೆಗೆ ಯಾವ ಯಾವ ಅವಧಿಗೆ ಸಂಬಂಧಿಸಿದಂತೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ತೀರ್ಪನ್ನು ಪಾಲಿಸಿ ರಾಜ್ಯ ಮಟ್ಟದ ಸಂಯೋಜಿತ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿತ್ತು; (ಪ್ರಕಟಿಸಿರುವ ಅಧಿಕೃತ ಜ್ಞಾಪನಾ ಪತ್ರಗಳನ್ನು ಒದಗಿಸುವುದು) | ಮಾನ್ಯ ಕರ್ನಾಟಕ ರಾಜ್ಯ ಆಡಳಿತ ಮಂಡಳಿಯ ಅರ್ಜಿ ಸಂಖ್ಯೆ: 3270/1996, 846-847/1996, 1253-1280/1996ರಲ್ಲಿ ದಿನಾಂಕ:11-09-1997 ರಲ್ಲಿನ ಆದೇಶದಲ್ಲಿ ಎಲ್ಲಾ ವೃತ್ತಗಳಲ್ಲಿ ವನಪಾಲಕರ (ಉಪ ವಲಯ ಅರಣ್ಯಾಧಿಕಾರಿ ಮತ್ತು ಮೋಜಣಿದಾರ) ಜೇಷ್ಠತಾ ಪಟ್ಟಿಗಳನ್ನು ಅಂತಿಮಗೊಳಿಸಿದ ನಂತರವೇ ರಾಜ್ಯ ಮಟ್ಟದ ಸಂಯೋಜಿತ ಜೇಷ್ಠತಾ ಪಟ್ಟಿಯನ್ನು ತಯಾರಿಸಬೇಕೆಂದು ನಿರ್ದೇಶನಗಳನ್ನು ನೀಡಿರುತ್ತದೆ.<br>ಅದರಂತೆ, ಉಪ ವಲಯ ಅರಣ್ಯಾಧಿಕಾರಿ ಮತ್ತು ಮೋಜಣಿದಾರರ ವೃತ್ತ ಮಟ್ಟದ ಜೇಷ್ಠತಾ ಪಟ್ಟಿಗಳನ್ನು ಪ್ರಕಟಿಸಿದ ನಂತರ ಕ್ರೋಢೀಕರಿಸಿ, ರಾಜ್ಯ ಮಟ್ಟದ ಸಂಯೋಜಿತ ಜೇಷ್ಠತಾ ಪಟ್ಟಿಯನ್ನು ತಯಾರಿಸಲಾಗಿದೆ. ಮಾನ್ಯ ಕರ್ನಾಟಕ ರಾಜ್ಯ ಆಡಳಿತ ಮಂಡಳಿಯು ರಾಜ್ಯ ಮಟ್ಟದ ಸಂಯೋಜಿತ ಜೇಷ್ಠತಾ ಪಟ್ಟಿಯನ್ನು ತಯಾರಿಸಲು ಆದೇಶಿಸಿದೆಯೇ ಹೊರತು ಅದನ್ನು ಪ್ರಕಟಿಸಬೇಕೆಂದು ಎಲ್ಲಿಯೂ ತಿಳಿಸಿರುವುದಿಲ್ಲ. |

| | | |
|---|---|---|
| ಇ) | 2018 ರವರೆಗೆ ರಾಜ್ಯಮಟ್ಟದ ಸಂಯೋಜಿತ ಜೇಷ್ಠತಾ ಪಟ್ಟಿಯನ್ನು ಆಧರಿಸಿ, ವಲಯ ಅರಣ್ಯಾಧಿಕಾರಿ ಹುದ್ದೆಗೆ ಮುಂಬಡ್ತಿ ನೀಡುತ್ತಿದ್ದ ಕ್ರಮವನ್ನು ಏಕಾಏಕೀ ಬದಲಿಸಲು ಇಲಾಖಾ ಮುಖ್ಯಸ್ಥರಿಗೆ ಸರ್ಕಾರ ನಿರ್ದೇಶನ ನೀಡಿದೆಯೇ; ಹೌದಾದಲ್ಲಿ, ಅದರ ಪ್ರತಿಯನ್ನು ಒದಗಿಸುವುದು; | - ಇಲ್ಲ - |
| ಈ) | ದಿನಾಂಕ:22.02.2021 ರಂದು ಉಪ ವಲಯ ಅರಣ್ಯಾಧಿಕಾರಿಗಳ ರಾಜ್ಯ ಮಟ್ಟದ ಸಂಯೋಜಿತ ಜೇಷ್ಠತಾ ಪಟ್ಟಿ ಪ್ರಕಟಿಸದೆ, ವಲಯ ಅರಣ್ಯಾಧಿಕಾರಿ ಹುದ್ದೆಗೆ ಮುಂಬಡ್ತಿ ಪ್ರಕ್ರಿಯೆ ಜರುಗಿಸಿರುವುದು ನಿಯಮಬಾಹಿರ ಕ್ರಮವೆಂಬುದು ಸರ್ಕಾರದ ಗಮನಕ್ಕೆ ಬಂದಿದೆಯೇ? ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರವು ಜರುಗಿಸಿದ ಕ್ರಮಗಳೇನು? ಒಂದು ವೇಳೆ ಈ ರೀತಿ ಮುಂಬಡ್ತಿ ನೀಡಲು ನಿಯಮಗಳಲ್ಲಿ ಅವಕಾಶವಿದ್ದಲ್ಲಿ ಅದಕ್ಕೆ ಸಂಬಂಧಿಸಿದ ಸುತ್ತೋಲೆ/ಮಾರ್ಗಸೂಚಿಯ ಪ್ರತಿಗಳನ್ನು ಒದಗಿಸುವುದು. | ವಲಯ ಅರಣ್ಯಾಧಿಕಾರಿಗಳ ಹುದ್ದೆಗೆ ಯಾವುದೇ ಸ್ಥಾನ ಪನ್ನ ಮುಂಬಡ್ತಿ ನೀಡಿರುವುದಿಲ್ಲ. ಉಪ ವಲಯ ಅರಣ್ಯಾಧಿಕಾರಿಗಳ ರಾಜ್ಯಮಟ್ಟದ ಸಂಯೋಜಿತ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸ್ಪಷ್ಟ ಅಭಿಪ್ರಾಯ ಕೋರಲಾಗಿದ್ದು, ಸದರಿ ಇಲಾಖೆಯಿಂದ ಸ್ಪಷ್ಟ ಅಭಿಪ್ರಾಯ ಪಡೆದ ನಂತರ ನಿಯಮಾನುಸಾರ ಪರಿಶೀಲಿಸಿ ಕ್ರಮವಹಿಸಲಾಗುವುದು. ಮುಂದುವರೆದು, ಉಪ ವಲಯ ಅರಣ್ಯಾಧಿಕಾರಿ ವೃಂದದಿಂದ ವಲಯ ಅರಣ್ಯಾಧಿಕಾರಿ ಹುದ್ದೆಗೆ ಕರ್ನಾಟಕ ಸಿವಿಲ್ ಸೇವಾ ನಿಯಮಗಳು, 1958ರ ನಿಯಮ-32 ರಡಿಯಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಿ ತಾತ್ಕಾಲಿಕವಾಗಿ ಸ್ಥಳ ನಿಯುಕ್ತಿಗೊಳಿಸಲಾಗಿದೆ. ಈ ಎಲ್ಲಾ ಕ್ರಮಗಳನ್ನು ಪಾರದರ್ಶಕವಾಗಿ ಸಾರ್ವಜನಿಕ ಹಾಗೂ ಆಡಳಿತಾತ್ಮಕ ಹಿತದೃಷ್ಟಿಯಿಂದ ಕ್ರಮಕೈಗೊಳ್ಳಲಾಗಿರುತ್ತದೆ. |

ಕಡತ ಸಂಖ್ಯೆ: ಅಪಜೀ 74 ಅಪಸೇ 2021 (ಇ)

(ಅರವಿಂದ ಲಿಂಬಾವಳಿ)

ಅರಣ್ಯ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

## ಪೂರಕ ಟಿಪ್ಪಣಿ.

ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು 1957ರ ನಿಯಮ-10ರ ಉಪಬಂಧಗಳಿಗೆ ಅನುಸಾರವಾಗಿ ಜೇಷ್ಠತಾ ಕ್ರಮದಲ್ಲಿ ಸಿದ್ಧಪಡಿಸಲಾದ ಸದರಿ ಕೇಡರಿನ ಅಥವಾ ಹುದ್ದೆಗಳ ವರ್ಗದಲ್ಲಿರುವ ಎಲ್ಲಾ ಅಧಿಕಾರಿಗಳ ಹೆಸರನ್ನು ಒಳಗೊಂಡ ಪ್ರತಿಯೊಂದು ಸೇವಾ ಕೇಡರಿನ ಅಥವಾ ಹುದ್ದೆಗಳ ವರ್ಗದ ಜೇಷ್ಠತಾ ಪಟ್ಟಿಯನ್ನು ಪ್ರತಿ ವರ್ಷ ತಯಾರಿಸಿ, ಸದರಿ ಪಟ್ಟಿಯನ್ನು ಸಂಬಂಧಪಟ್ಟ ನೇಮಕಾತಿ ಪ್ರಾಧಿಕಾರವು ಪ್ರಕಟಿಸಬೇಕಾಗಿರುತ್ತದೆ.

ಅದರಂತೆ ಉಪ ವಲಯ ಅರಣ್ಯಾಧಿಕಾರಿ ವೃಂದದ ಜೇಷ್ಠತಾ ಪಟ್ಟಿಯನ್ನು ತಯಾರಿಸಲು ವೃತ್ತಮಟ್ಟದ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ/ಅರಣ್ಯ ಸಂರಕ್ಷಣಾಧಿಕಾರಿಗಳು ನೇಮಕಾತಿ ಪ್ರಾಧಿಕಾರಿಯಾಗಿದ್ದು, ಜೇಷ್ಠತಾ ಪಟ್ಟಿಗಳನ್ನು ಪ್ರಕಟಿಸಲು ಸಕ್ಷಮ ಪ್ರಾಧಿಕಾರವಾಗಿರುತ್ತಾರೆ. ದಿನಾಂಕ:29.07.2020ರಿಂದ 29.08.2020ರವರೆಗೆ ಎಲ್ಲಾ 13 ವೃತ್ತಗಳಲ್ಲಿ ಉಪ ವಲಯ ಅರಣ್ಯಾಧಿಕಾರಿ ಹಾಗೂ ಮೋಜಣಿದಾರ ವೃಂದದ ಜೇಷ್ಠತಾ ಪಟ್ಟಿಗಳನ್ನು ಆಯಾ ವೃತ್ತಗಳ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು/ಅರಣ್ಯ ಸಂರಕ್ಷಣಾಧಿಕಾರಿಗಳು ತಯಾರಿಸಿ ಪ್ರಕಟಿಸಿರುತ್ತಾರೆ. ಈ ರೀತಿ ಅಂತಿಮಗೊಳಿಸಿದ ಉಪ ವಲಯ ಅರಣ್ಯಾಧಿಕಾರಿ ಮತ್ತು ಮೋಜಣಿದಾರರ ಜೇಷ್ಠತಾ ಪಟ್ಟಿಗಳನ್ನು ಇಲಾಖೆಯ ಜಾಲತಾಣದಲ್ಲಿಯೂ ಸಹ ಪ್ರಕಟಿಸಲಾಗಿದೆ.

ಉಪ ವಲಯ ಅರಣ್ಯಾಧಿಕಾರಿಗಳ ಹುದ್ದೆಗೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ರವರು ನೇಮಕಾತಿ ಪ್ರಾಧಿಕಾರವಾಗಿರುವುದಿಲ್ಲ. ಹಾಗೂ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲು ಸಕ್ಷಮ ಪ್ರಾಧಿಕಾರವಾಗಿರುವುದಿಲ್ಲ.

ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ:3270/96, 846-847/96, 1253-1280/96ರಲ್ಲಿ ದಿನಾಂಕ:11.09.1997ರಂದು ನೀಡಿರುವ ಆದೇಶದಲ್ಲಿ ಪ್ರತಿವಾದಿಗಳು ಎಲ್ಲಾ ವೃತ್ತಗಳಲ್ಲಿ ವನಪಾಲಕರ (ಉಪ ವಲಯ ಅರಣ್ಯಾಧಿಕಾರಿ ಮತ್ತು ಮೋಜಣಿದಾರ) ಜೇಷ್ಠತಾ ಪಟ್ಟಿಗಳನ್ನು ಅಂತಿಮಗೊಳಿಸಿದ ನಂತರವೇ ರಾಜ್ಯಮಟ್ಟದ ಸಂಯೋಜಿತ ಜೇಷ್ಠತಾ ಪಟ್ಟಿಗಳನ್ನು ತಯಾರಿಸಬೇಕೆಂದು ನಿರ್ದೇಶನಗಳನ್ನು ನೀಡಿರುತ್ತದೆ. ಅದರಂತೆ ಉಪ ವಲಯ ಅರಣ್ಯಾಧಿಕಾರಿ ಮತ್ತು ಮೋಜಣಿದಾರರ ವೃತ್ತಮಟ್ಟದ ಜೇಷ್ಠತಾ ಪಟ್ಟಿಗಳನ್ನು ಪ್ರಕಟಿಸಿದ ನಂತರ ಕ್ರೋಢೀಕರಿಸಿ ರಾಜ್ಯಮಟ್ಟದ ಸಂಯೋಜಿತ ಜೇಷ್ಠತಾ ಪಟ್ಟಿಯನ್ನು ತಯಾರಿಸಲಾಗಿದೆ. ಮಾನ್ಯ ಆಡಳಿತ ನ್ಯಾಯ ಮಂಡಳಿಯು ರಾಜ್ಯ ಮಟ್ಟದ ಸಂಯೋಜಿತ ಜೇಷ್ಠತಾ ಪಟ್ಟಿಯನ್ನು ತಯಾರಿಸಲು ಆದೇಶಿಸಿದೆಯೇ ಹೊರತು ಅದನ್ನು ಪ್ರಕಟಿಸಬೇಕೆಂದು ಎಲ್ಲಿಯೂ ತಿಳಿಸಿರುವುದಿಲ್ಲ.

ಉಪ ವಲಯ ಅರಣ್ಯಾಧಿಕಾರಿಗಳ ರಾಜ್ಯ ಮಟ್ಟದ ಸಂಯೋಜಿತ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಿಂದ ಪಡೆದಿದ್ದ ಅಭಿಪ್ರಾಯ ಕರ್ನಾಟಕ ಸಿವಿಲ್ ಸೇವಾ (ಜೇಷ್ಠತಾ) ನಿಯಮಗಳು, 1957ರ ನಿಯಮಗಳನ್ವಯ ಸ್ಪಷ್ಟತೆ ಇಲ್ಲದೇ ಇರುವುದರಿಂದ ಸದರಿ ಅಭಿಪ್ರಾಯವನ್ನು ಪುನರ್ ಪರಿಶೀಲಿಸಿ ಸ್ಪಷ್ಟ/ ನಿಖರ ಅಭಿಪ್ರಾಯ ನೀಡುವಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯನ್ನು ಕೋರಲಾಗಿದ್ದು ಸದರಿ ಅಭಿಪ್ರಾಯ ಪಡೆದ ನಂತರ ನಿಯಮಾನುಸಾರ ಪರಿಶೀಲಿಸಿ ಕ್ರಮವಹಿಸಲಾಗುತ್ತದೆ.

ವಲಯ ಅರಣ್ಯಾಧಿಕಾರಿಗಳ ಹುದ್ದೆಗೆ ಯಾವುದೇ ಮುಂಬಡ್ತಿ ಸ್ಥಾನ ಪನ್ನ ಮುಂಬಡ್ತಿ ನೀಡಿರುವುದಿಲ್ಲ. ಉಪ ವಲಯ ಅರಣ್ಯಾಧಿಕಾರಿಗಳ ರಾಜ್ಯಮಟ್ಟದ ಸಂಯೋಜಿತ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವ ಬಗ್ಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಸ್ಪಷ್ಟ ಅಭಿಪ್ರಾಯ ಕೋರಲಾಗಿದ್ದು, ಸದರಿ ಇಲಾಖೆಯಿಂದ ಸ್ಪಷ್ಟ ಅಭಿಪ್ರಾಯ ಪಡೆದ ನಂತರ ನಿಯಮಾನುಸಾರ ಪರಿಶೀಲಿಸಿ ಕ್ರಮವಹಿಸಲಾಗುವುದು. ಮುಂದುವರೆದು, ಉಪ ವಲಯ ಅರಣ್ಯಾಧಿಕಾರಿ ವೃಂದದಿಂದ ವಲಯ ಅರಣ್ಯಾಧಿಕಾರಿ ಹುದ್ದೆಗೆ ಕರ್ನಾಟಕ ಸಿವಿಲ್ ಸೇವಾ ನಿಯಮಗಳು, 1958ರ ನಿಯಮ-32 ರಡಿಯಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಿ ತಾತ್ಕಾಲಿಕವಾಗಿ ಸ್ಥಳ ನಿಯುಕ್ತಿಗೊಳಿಸಲಾಗಿದೆ. ಈ ಎಲ್ಲಾ ಕ್ರಮಗಳನ್ನು ಪಾರದರ್ಶಕವಾಗಿ ಸಾರ್ವಜನಿಕ ಹಾಗೂ ಆಡಳಿತಾತ್ಮಕ ಹಿತದೃಷ್ಟಿಯಿಂದ ಕ್ರಮಕೈಗೊಳ್ಳಲಾಗಿರುತ್ತದೆ.